# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 35(100)
ಸದಸ್ಯರ ಹೆಸರು : ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ)
ಉತ್ತರಿಸುವ ದಿನಾಂಕ : 02-03-2020
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಪ್ರೌಢಶಾಲೆಯಲ್ಲಿನ ಅರ್ಹ ಸಹ ಶಿಕ್ಷಕರಿಗೆ ಪದವಿ ಪೂರ್ವ ಕಾಲೇಜಿನ ಉಪನ್ಯಾಸಕರ ಹುದ್ದೆಗಳಿಗೆ ಮುಂಬಡ್ತಿ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಬಂದಿದೆ. |
| ಆ) | ವೃಂದ ಬಲದ ಆಧಾರದಲ್ಲಿ ಶೇಕಡ 25 ರಷ್ಟು ಮುಂಬಡ್ತಿ ನೀಡಲಾಗಿದೆಯೇ: | ಇಲ್ಲ |
| ಇ) | ನೀಡಿದ್ದಲ್ಲಿ, ವಿಷಯವಾರು ಕಾರ್ಯ ನಿರ್ವಹಿಸುತ್ತಿರುವ ಉಪನ್ಯಾಸಕರ ವಿವರ ನೀಡುವುದು: | ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್ 71 ಎಸ್‌ಆರ್‌ಇ 94 ದಿನಾಂಕ:27-05-1998ರಲ್ಲಿ ಶೇಕಡ 50ರಷ್ಟು ಉಪನ್ಯಾಸಕರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಮತ್ತು ಶೇಕಡ 50ರಷ್ಟು ಪ್ರೌಢ ಶಾಲಾ ಸಹ ಶಿಕ್ಷಕರ ವೃಂದದಿಂದ ಸರ್ಕಾರಿ ಪದವಿ ಪೂರ್ವ ಕಾಲೇಜಿನ ಉಪನ್ಯಾಸಕರ ವೃಂದಕ್ಕೆ ಬಡ್ತಿ ನೀಡಲು ಅವಕಾಶ ಕಲ್ಪಿಸಲಾಗಿತ್ತು. ಅದರಂತೆ, 2011ರಲ್ಲಿ ಅರ್ಹ 497 ಮತ್ತು 697 ಪ್ರೌಢ ಶಾಲಾ ಸಹ ಶಿಕ್ಷಕರನ್ನು ಉಪನ್ಯಾಸಕರ ವೃಂದಕ್ಕೆ ಬಡ್ತಿ ನೀಡಲಾಗಿರುತ್ತದೆ.<br><br>ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ 35 ಡಿಜಿಓ 2009 ದಿನಾಂಕ:15-05-2014ರಂದು ವೃಂದ ಮತ್ತು ನೇಮಕಾತಿ ನಿಯಮಕ್ಕೆ ಪರಿಷ್ಕರಣೆ ಮಾಡಿ ಶೇಕಡ 75ರಷ್ಟು ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಮತ್ತು ಶೇಕಡ 25ರಷ್ಟು ಹುದ್ದೆಗಳನ್ನು ಬಡ್ತಿ ಮೂಲಕ ತುಂಬಲು ಅವಕಾಶ ಕಲ್ಪಿಸಲಾಗಿದೆ.<br><br>ಪ್ರೌಢ ಶಾಲಾ ಸಹ ಶಿಕ್ಷಕರಿಗೆ ಉಪನ್ಯಾಸಕರ ವೃಂದಕ್ಕೆ ಬಡ್ತಿ ಕೋಟಾದಲ್ಲಿ ಈಗಾಗಲೇ ಶೇಕಡ 50ರಷ್ಟು ಪದೋನ್ನತಿ ನೀಡಿದ್ದರಿಂದ 395 ಹುದ್ದೆಗಳು ಹೆಚ್ಚುವರಿಯಾಗಿದ್ದು, ಶೇಕಡ 75:25ರ ಬಡ್ತಿ ಕೋಟಾದ ಹುದ್ದೆಗಳು ಖಾಲಿ ಇಲ್ಲದಿರುವುದರಿಂದ ಪ್ರಸ್ತುತ ಬಡ್ತಿ ನೀಡಲು ಅವಕಾಶವಿರುವುದಿಲ್ಲ. |

ಈ) ಈ ವೃಂದ ಬಲದ ಆಧಾರದಲ್ಲಿ ಮುಂಬಡ್ತಿ ಪಡೆದ ಪ್ರೌಢಶಾಲಾ ಶಿಕ್ಷಕರು ಹಾಲಿ ಕಾರ್ಯನಿರ್ವಹಿಸುತ್ತಿರುವವರ ವಿಷಯವಾರು ವಿವರ ನೀಡುವುದು:

SUBJECT WISE DR AND PR LECTURER DETAIL

| SUB_CD | SUB_NM | PR | DR | TOTAL |
|---|---|---|---|---|
| 1 | KANNADA | 251 | 706 | 957 |
| 2 | ENGLISH | 415 | 658 | 1073 |
| 3 | HINDI | 5 | 51 | 56 |
| 7 | MARATHI | 1 | 2 | 3 |
| 8 | URDU | 7 | 24 | 31 |
| 9 | SANSKRIT | 2 | 22 | 24 |
| 21 | HISTORY | 446 | 583 | 1029 |
| 22 | ECONOMICS | 375 | 593 | 968 |
| 23 | LOGIC | 0 | 6 | 6 |
| 24 | GEOGRAPHY | 32 | 44 | 76 |
| 27 | BUSI. STUDIES | 2 | 366 | 368 |
| 28 | SOCIOLOGY | 319 | 509 | 828 |
| 29 | POLITICAL SC | 362 | 590 | 952 |
| 33 | PHYSICS | 292 | 374 | 666 |
| 34 | CHEMISTRY | 314 | 385 | 699 |
| 35 | MATHEMATICS | 259 | 354 | 613 |
| 36 | BIOLOGY | 249 | 362 | 611 |
| 40 | ELECTRONICS | 0 | 17 | 17 |
| 41 | COMPUTER-SC | 1 | 18 | 19 |
| 52 | EDUCATION | 1 | 25 | 26 |
| | TOTAL | 3333 | 5689 | 9022 |

ಉ) ಮುಂಬಡ್ತಿ ನೀಡುವುದು ಬಾಕಿ ಇದ್ದಲ್ಲಿ ಯಾವ ಕಾಲಮಿತಿಯಲ್ಲಿ ವೃಂದ ಬಲದ ಆಧಾರದಲ್ಲಿ ಕೊರತೆ ಇರುವ ಉಪನ್ಯಾಸಕರ ಹುದ್ದೆಗಳಿಗೆ ಮುಂಬಡ್ತಿ ನೀಡಲಾಗುವುದು?

2014ರ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಈಗಾಗಲೆ 395 ಹುದ್ದೆಗಳು ಹೆಚ್ಚುವರಿಯಾಗಿದ್ದು, ಬಡ್ತಿ ಕೋಟಾದ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಉಪನ್ಯಾಸಕರು ವಯೋ ನಿವೃತ್ತಿ, ರಾಜೀನಾಮೆ ಹಾಗೂ ನಿಧನದಿಂದ ತೆರವಾಗುವ ಹುದ್ದೆಗಳನ್ನು ಮುಂಬಡ್ತಿಗೆ ಪರಿಗಣಿಸಲಾಗುವುದು.

**ಸಂಖ್ಯೆ: ಇಡಿ 29 ಡಿಜಿಡಬ್ಲ್ಯೂ 2020**

(ಎಸ್.ಸುರೇಶ್ ಕುಮಾರ್)

ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು.